ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಬಿ.ಡಿ.ಎ ನೌಕರರ ಕ್ಷೇಮಾಭಿವೃದ್ಧಿ ಸಂಘಕ್ಕೆ ಆಡಳಿತಾಧಿಕಾರಿ ನೇಮಿಸುವ ಬಗ್ಗೆ

ಶ್ರೀ ಶರಣಪ್ಪ ಮಟ್ಟೂರ(ಶಿಕ್ಷಕರ ಕ್ಷೇತ್ರ):-

1554 (1825) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಎಂಪ್ಲಾಯೀಸ್ ವೆಲ್ಫೇರ್ ಅಸೋಸಿಯೇಷನ್‌ನಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ಒಟ್ಟು ಎಷ್ಟು ತನಿಖೆಗಳು ನಡೆದಿವೆ; ಯಾರ್ಯಾರು ತನಿಖೆ ನಡೆಸಿದ್ದಾರೆ ; (ವಿವರ ನೀಡುವುದು)

(ಆ) ಸಂಘಗಳ ನೋಂದಣಿ ಕಾಯ್ದೆ 1960 ಕಂದಾಯ ಇಲಾಖೆಯ ಅಧೀನದಲ್ಲಿದ್ದ ಕಂದಾಯ ಇಲಾಖೆ ಅಧಿಕಾರಿಗಳು ಸಂಘದ ಅಧ್ಯಕ್ಷರೊಡನೆ ಶಾಮೀಲಾಗಿ ಪ್ರಾಧಿಕಾರದಲ್ಲಿನ ಸಂಘದ ವಿರುದ್ಧ ತನಿಖೆ ನಡೆಸಲು ಪ್ರಾಧಿಕಾರದಲ್ಲಿಯೇ ಗುತ್ತಿಗೆ ಆಧಾರದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಅಧಿಕಾರಿಯನ್ನು ನೇಮಿಸಿರುವುದು ನಿಜವೇ; ಇದ್ದಲ್ಲಿ, ಅಲ್ಲಿನ ಅಧಿಕಾರಿಯನ್ನೇ ತನಿಖೆಗೆ ನೇಮಿಸಿರುವುದು ಕಾನೂನು ನಿಯಮಗಳಿಗೆ ವಿರುದ್ಧವಲ್ಲವೇ;

(ಇ) ನಿವೃತ್ತ ನ್ಯಾಯಾಧೀಶರವರು ಸಂಘದ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಿ ವರದಿ ಸಲ್ಲಿಸಿರುವುದು ನಿಜವೇ; ಇದ್ದಲ್ಲಿ, ತನಿಖಾ ವರದಿಯ ಪ್ರತಿ ನೀಡುವುದು ;

(ಈ) ಸದರಿ ಸಂಘವು ಸಂಘಗಳ ನೋಂದಣಿ ಅಧಿನಿಯಮ 1960ರಡಿ ನೋಂದಾಯಿಸಿದ್ದರೂ, ಸಂಘ ನೋಂದಾಯಿಸಿರುವ ನಿವೇಶನಗಳ ಕ್ರಯ ಪತ್ರಗಳಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಸಂಘದ ಕಾಯ್ದೆ 1959ರಡಿ ನೋಂದಾಯಿಸಿರುವ ಸಂಘ ಎಂದು ಸುಳ್ಳು ಮಾಹಿತಿ ದಾಖಲಿಸಿರುವುದು ನಿಜವೇ; ಇದ್ದಲ್ಲಿ, ಸಂಘದ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು ;

(ಉ) ಸಂಘಕ್ಕೆ ಆಡಳಿತಾಧಿಕಾರಿ ನೇಮಿಸದಿರಲು ಶಿಫಾರಸ್ಸು ಮಾಡಿರುವುದು ನಿಜವೇ; ಇದ್ದಲ್ಲಿ, ಇಲ್ಲಿಯವರೆಗೂ ನೇಮಿಸದಿರಲು ಕಾರಣಗಳೇನು; ಯಾವ ನಿರ್ಧಿಷ್ಟ ದಿನಾಂಕದಿಂದ ಆಡಳಿತಾಧಿಕಾರಿಯನ್ನು ನೇಮಿಸಿ ನಿವೇಶನಕ್ಕೆ ಹಣ ಪಾವತಿಸಿರುವ ಪ್ರಾಧಿಕಾರದ ನಿವೃತ್ತ ನೌಕರರಿಗೆ ನಿವೇಶನ ಹಂಚಿಕೆ ಮಾಡಿ ನ್ಯಾಯ ಒದಗಿಸಲಾಗುವುದು?